ಕಲಿತ ಪಾಠಗಳು: ಅಜೀಂ ಪ್ರೇಮ್‌ಜಿ ಶಾಲೆಗಳ ಟಿಪ್ಪಣಿಗಳು

-ಪಲ್ಲವಿ ಚತುರ್ವೇದಿ

...........

ಕಳೆದ ಒಂದೂವರೆ ವರ್ಷದ ಹಿಂದೆಂದೂ ಕಂಡಿಲ್ಲದ ಅನುಭವಗಳಿಂದ, ಜಗತ್ತು ನಾನಾ ವಿಧದ ಅನಿಶ್ಚಿತತೆಗಳಿಗೆ ಹೊಂದಿಕೊಳ್ಳುವುದನ್ನು ಕಲಿತಿರುವಾಗ, ದೇಶದಲ್ಲಿ ಕ್ಷೀಣವಾಗಿದ್ದ ಶಾಲಾ ಶಿಕ್ಷಣದ ವಾಸ್ತವ ಇನ್ನಷ್ಟು ಅನಿಶ್ಚಿತತೆ ಮೂಡಿಸಿದೆ. ಮಕ್ಕಳ ಶಿಕ್ಷಣದಲ್ಲಿ ತೊಡಗಿಸಿಕೊಂಡಿರುವ ವಿವಿಧ ಶೈಕ್ಷಣಿಕ ಸಂಸ್ಥೆಗಳ ಬಹುತೇಕ ಶಾಲೆಗಳಲ್ಲಿ ಜಾರಿಗೊಳಿಸಿದ ಆನ್‌ಲೈನ್ ಶಿಕ್ಷಣ ಹಾಗು ಇನ್ನಿತರ ಕ್ರಮಗಳ ನಡುವೆಯೂ ಮಕ್ಕಳಿಗೆ ನೈಜ ಶಿಕ್ಷಣದ ಅವಕಾಶಗಳು ಗಣನೀಯವಾಗಿ ಕುಸಿದಿವೆ. ಇದಕ್ಕೆ ಸಾಂಕ್ರಾಮಿಕವು ಮನುಕುಲಕ್ಕೆ ಒಡ್ಡಿದ ಹಲವು ಸವಾಲುಗಳು ಕಾರಣವಾಗಿದ್ದು, ಇದರಲ್ಲಿ ಹೆಚ್ಚಿನವಕ್ಕೆ ಅಸ್ತಿತ್ವಕ್ಕಾಗಿ ತಕ್ಷಣ ಗಮನ ನೀಡಬೇಕಾಗಿದೆ. ಇದರಿಂದಾಗಿ, ಬಹಳಷ್ಟು ಕುಟುಂಬಗಳ, ವಿಶೇಷವಾಗಿ ಸಮಾಜದ ಆರ್ಥಿಕವಾಗಿ ದುರ್ಬಲ ಸ್ತರದಲ್ಲಿರುವ ಬಹುಸಂಖ್ಯಾತರ ಆದ್ಯತೆಗಳ ಪಟ್ಟಿಯಲ್ಲಿ ಮಕ್ಕಳ ಶಿಕ್ಷಣ ಕೆಳ ಹಂತಕ್ಕೆ ಸರಿದಿದ್ದು ಆಶ್ಚರ್ಯವೇನಲ್ಲ.

ಕೋವಿಡ್-19 ಸಾಂಕ್ರಾಮಿಕ ತಂದ ಹೆಚ್ಚುವರಿ ಅಸಹಾಯಕತೆ ಮತ್ತು ಅಲ್ಲೋಲಕಲ್ಲೋಲದಿಂದ ಜಗತ್ತು ಲಸಿಕೆಯ ಶೀಘ್ರ ಶೋಧನೆ ಮತ್ತು ಲಸಿಕಾ ಆಂದೋಲನದಿಂದಾಗಿ ಹೊರಬರುತ್ತಿರುವ ಈ ಸಂದರ್ಭದಲ್ಲೇ ಮಕ್ಕಳ ಶಿಕ್ಷಣವು ನಿರ್ಲಕ್ಷಿತವಾಗಿದೆ ಎಂಬ ವಾಸ್ತವವು ನಿಧಾನವಾಗಿ ನಮ್ಮ ಅರಿವಿಗೆ ಬರುತ್ತಿದೆ. ಜೊತೆಗೆ, ದೀರ್ಘ ತಡೆಯ ಬಳಿಕ ಶಾಲೆಗಳು ಆರಂಭವಾದ ಬಳಿಕ ಮುಂದಿನ ದಾರಿ ಏನು ಹಾಗು ಮಕ್ಕಳ ಶಿಕ್ಷಣದಲ್ಲಿನ ಕಂದಕವನ್ನು ಹೇಗೆ ತುಂಬಬೇಕು ಎಂಬ ಆತಂಕ ಶಿಕ್ಷಕರು ಮತ್ತು ಪೋಷಕರಲ್ಲಿ ವ್ಯಾಪಕವಾಗಿ ಮನೆ ಮಾಡಿದೆ. ಅದೃಷ್ಟವಶಾತ್ ಅಜೀಂ ಪ್ರೇಮ್‌ಜಿ ಶಾಲೆಗಳು ಸೇರಿದಂತೆ ಕೆಲವು ಶಾಲೆಗಳಲ್ಲಿ ಎಲ್ಲರೂ ಮರುಆರಂಭದ ಘೋಷಣೆಯನ್ನು ಎದುರು ನೋಡುತ್ತಿದ್ದಾರೆ. ಸಾಂಕ್ರಾಮಿಕದ ಅನುಭವಗಳು ಕಠೋರ ಹಾಗು ತೀವ್ರ ಸಂಕಟದಾಯಕವಾಗಿದ್ದರೂ, ನಮ್ಮ ಮುಂದೆ ಇದ್ದ ಅನಿರೀಕ್ಷಿರತ ಸಮಸ್ಯೆಗಳಿಗೆ ಪರಿಹಾರವನ್ನು ಒದಗಿಸಿತು. ಇಂಥ ಕೆಲವು ಕ್ರಿಯೆಗಳನ್ನು ಭರವಸೆ ಮತ್ತು ಆತ್ಮವಿಶ್ವಾಸದಿಂದ ಪ್ರಯತ್ನಿಸಲಾಯಿತು ಮತ್ತು ಸಣ್ಣ ಪ್ರಯತ್ನಗಳಾಗಿದ್ದರೂ, ಅಡೆತಡೆ ಮತ್ತು ಪ್ರತಿಕೂಲ ಪರಿಸ್ಥಿತಿಯಲ್ಲೂ ಶಿಕ್ಷಕರು ನಡೆಸಿದ ಪ್ರಯತ್ನಗಳ ಆಕರ್ಷಕ ಕಥನಗಳನ್ನು ಅನಾವರಣಗೊಳಿಸಿತು. ಮಕ್ಕಳು ಮತ್ತು ಅವರ ಕುಟುಂಬಗಳ ತತ್‌ಕ್ಷಣದ ಅವಶ್ಯಕತೆಗಳ ಬಗೆಗಿನ ಅರಿವು ಇದ್ದುದರಿಂದ ಪಠ್ಯಕ್ರಮದ ಗುರಿಗಳ ಮೇಲೆ ಕಣ್ಣಿರಿಸಿಕೊಂಡು ಶಿಕ್ಷಕರು ಹೊಸ ಮಾರ್ಗಗಳನ್ನು ಕಂಡುಕೊಂಡರು, ನಿರಂತರವಾಗಿ ಚಿಂತನೆ ನಡೆಸಿದರು ಮತ್ತು ಶಾಲೆಗಳ ಪುನಾರಂಭಕ್ಕೆ ಪಠ್ಯಕ್ರಮವನ್ನು ಯೋಜಿಸಿದರು.

ಫೌಂಡೇಷನ್‌ನ ಮಧ್ಯಪ್ರವೇಶಗಳು:

ರಾಜಸ್ಥಾನ, ಛತ್ತೀಸ್‌ಗಢ, ಕರ್ನಾಟಕ ಹಾಗು ಉತ್ತರಾಖಂಡದಲ್ಲಿನ ನಮ್ಮ ಶಾಲೆಗಳು ಕಳೆದ ವರ್ಷ ಏಪ್ರಿಲ್‌ನ ಮೊದಲ ಲಾಕ್‌ಡೌನ್ ಬಳಿಕ ಶೈಕ್ಷಣಿಕ ಮತ್ತು ಮಾನವೀಯ ನೆರವು ನೀಡಲು ಮಧ್ಯಪ್ರವೇಶವನ್ನು ಆರಂಭಿಸಿದವು. ಒಂದಾದ ಮೇಲೆ ಇನ್ನೊಂದರಂತೆ ಬಂದ ಮೂರು ಲಾಕ್‌ಡೌನ್ ವೇಳೆಯಲ್ಲಿ ಆಹಾರ ಮತ್ತು ಪೌಷ್ಟಿಕಾಂಶಗಳ ಪೂರೈಕೆ ತಕ್ಷಣದ ಮತ್ತು ತುರ್ತು ಅಗತ್ಯವಾಗಿದ್ದವು;

ಸರ್ಕಾರ ಮಾತ್ರವಲ್ಲದೆ, ಸ್ವಲ್ಪಮಟ್ಟಿಗೆ ಅನುಕೂಲಸ್ಥರಾದ ಪ್ರತಿಯೊಬ್ಬ ಮನುಷ್ಯರೂ ಇದಕ್ಕೆ ಗಮನ ಕೊಡಬೇಕಿತ್ತು. ನಾಗರಿಕ ಸಮಾಜದ ಒಂದು ಪ್ರಮುಖ ಸಂಸ್ಥೆಯಾಗಿ ನಮ್ಮ ಪ್ರತಿಕ್ರಿಯೆ ಪ್ರಾಮಾಣಿಕ ಹಾಗೂ ಪರಿಣಾಮಕಾರಿಯಾಗಿತ್ತು. ನಾನಾ ರಾಜ್ಯಗಳಲ್ಲಿರುವ ಜಿಲ್ಲಾ ಘಟಕದ ತಂಡಗಳಲ್ಲದೆ, ನಮ್ಮ ಶಾಲೆಗಳ ಶಿಕ್ಷಕರು ತಮ್ಮ ವಿದ್ಯಾರ್ಥಿಗಳ ಕುಟುಂಬಗಳಿಗೆ ಪಡಿತರ ಮತ್ತು ಅಗತ್ಯ ವಸ್ತುಗಳನ್ನು ಪೂರೈಸುವ ಕೆಲಸ ಮಾಡಿದರು. ಜೊತೆಜೊತೆಗೆ ಆನ್‌ಲೈನ್ ತರಗತಿಗಳು ಹಾಗು ಕಾರ್ಯಹಾಳೆಯನ್ನು ಬಳಸಿಕೊಂಡ ನಿರಂತರ ಶೈಕ್ಷಣಿಕ ತೊಡಗಿಸಿಕೊಳ್ಳುವಿಕೆಯೂ ಮುಂದುವರಿಯಿತು. ಆದರೆ ಮಕ್ಕಳಿಗೆ ದಿನದಲ್ಲಿ ಕೆಲವು ಗಂಟೆಗಳಾದರೂ ಸ್ಮಾರ್ಟ್‌ಫೋನ್ ಲಭ್ಯವಿಲ್ಲದೆ ಇದ್ದುದು ಮತ್ತು ಪೋಷಕರ ಬಳಿ ಸ್ಮಾರ್ಟ್‌ಫೋನ್ ಇದ್ದರೂ, ಪೋಷಕರು ಅದನ್ನು ಕೊಂಡೊಯ್ಯುತ್ತಿದ್ದುದು ಹಾಗು ಮನೆಗೆ ತಡವಾಗಿ ಆಗಮಿಸುತ್ತಿದ್ದುದು ಸೇರಿದಂತೆ ಹಲವು ಕಾರಣಗಳಿಂದಾಗಿ ಇವೆರಡೂ ಗ್ರಾಮೀಣ ಮತ್ತು ಕೊಳೆಗೇರಿಯಲ್ಲಿ ವಾಸಿಸುವ ಮಕ್ಕಳಿಗೆ ನಿರುಪಯುಕ್ತವಾಗಿತ್ತು. ಇದಲ್ಲದೆ, ಬಹುತೇಕ ವಿದ್ಯಾರ್ಥಿಗಳ ಇಬ್ಬರೂ ಪೋಷಕರು ಕೆಲಸಕ್ಕೆ ಹೋಗುತ್ತಿದ್ದರು ಮತ್ತು ಒಂದು ವೇಳೆ ತಾಯಿ ಮನೆಯಲ್ಲೇ ಉಳಿದುಕೊಂಡಿದ್ದರೂ, ಅಕ್ಷರಜ್ಞಾನವಿಲ್ಲದೆ ಇದ್ದುದರಿಂದ ಅಥವಾ ಮನೆಕೆಲಸದ ಒತ್ತಡದಿಂದಾಗಿ ಮಕ್ಕಳಿಗೆ ನೆರವಾಗಲು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ, ಜೀವನ ಸಹಜ ಸ್ಥಿತಿಗೆ ಬರುತ್ತಿದ್ದಂತೆ ಗ್ರಾಮಗಳು ಹಾಗು ನಗರಗಳ ಸಮುದಾಯಗಳಲ್ಲಿ ನಿರಂತರವಾಗಿ ತರಗತಿಗಳನ್ನು ಆರಂಭಿಸುವ ಯೋಜನೆ ಸಿದ್ಧಗೊಳಿಸಿದೆವು ಮತ್ತು ಅನುಷ್ಠಾನಕ್ಕೆ ತಂದೆವು. ಸಾಂಕ್ರಾಮಿಕದಿಂದ ಬದುಕು ಬದಲಾದ ಮಕ್ಕಳಿಗೆ ನಿರಂತರ ತರಗತಿಗಳು ಹೇಗೆ ಮುಖ್ಯ ಎಂಬುದನ್ನು ಈ ಭೇಟಿಗಳು ಸ್ಪಷ್ಟಪಡಿಸಿದವು. ನನ್ನ ಸ್ಮರಣೆಯಲ್ಲಿ ಕೆತ್ತಲ್ಪಟ್ಟ, ಸುತ್ತಲಿನ ವಾಸ್ತವದ ವಿವಿಧ ಚಿತ್ರಗಳನ್ನು ನೋಡಲು ಕೆಲವು ಉದಾಹರಣೆಗಳನ್ನು ಇಲ್ಲಿ ಉಲ್ಲೇಖಿಸುವುದು ಸಮಂಜಸವಾಗಬಹುದು:

ಸಣ್ಣ ನಗರವೊಂದರಲ್ಲಿ ಮೂರನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಬಂಟು, ಒಂದು ಕೊಠಡಿಯ ತನ್ನ ಜೋಪಡಿಯಲ್ಲಿ ತಿನ್ನಲು ಏನಾದರೂ ಸಿಗುವುದೇ ಎಂದು ತಡಕಾಡುತ್ತಿದ್ದ. ಅವನ ತಾಯಿ ಮುಂಜಾನೆಯೇ ಮನೆಗೆಲಸಕ್ಕೆ ತೆರಳಿದ್ದಳು. ಕೊನೆಗೆ ತಿನ್ನಲು ಏನೂ ಸಿಗದೆ ತಾನೇ ಚಪಾತಿ ಮಾಡಿಕೊಳ್ಳಲು ನಿರ್ಧರಿಸಿದ್ದು ನನ್ನ ನೆನಪಿನ ಕಮಾನಿನಲ್ಲಿ ಅಚ್ಚಳಿಯದೆ ಉಳಿದಿದೆ; ಎಂಟನೇ ತರಗತಿಯ ಗಾಯತ್ರಿಯ ಉತ್ಸಾಹಭರಿತ ಬಿಂಬ ಕೂಡ ನನ್ನ ನೆನಪಿನಲ್ಲಿ ಉಳಿದುಕೊಂಡಿದೆ. ಆಕೆಯ ಪೋಷಕರು ಬೆಳ್ಳಂಬೆಳಗ್ಗೆಯೇ ತುಂಡು ಜಮೀನಿನಲ್ಲಿ ಕೆಲಸ ಮಾಡಲು ತೆರಳಿದ್ದರಿಂದ, ಗಾಯತ್ರಿ ಒಂದು ಹಸುಗೂಸು ಸೇರಿದಂತೆ ಮೂವರು ಕಿರಿಯ ಮಕ್ಕಳನ್ನು ನೋಡಿಕೊಳ್ಳುತ್ತಲೇ ಮನೆಕೆಲಸ ಮಾಡುತ್ತಿತ್ತಾ ಓದಿಗಾಗಿಯೂ ಕೆಲ ಸಮಯವನ್ನು ಮೀಸಲಿಡುತ್ತಿದ್ದಳು: ಅಥವಾ, ಅದೇ ತರಗತಿಯ ಜೋಷುವಾ, ಮನೆಕೆಲಸ ಹಾಗು ರಾಸುಗಳ ದೇಖರೇಖಿಯ ನಡುವೆಯೇ ಮೊಹಲ್ಲಾ ಶಾಲೆಗೆ ನಿಯತವಾಗಿ ಹಾಜರಾಗಿ ಓದಿನ ಮೇಲೆ ಗಮನ ಕೇಂದ್ರೀಕರಿಸಲು ಸಾಕಷ್ಟು ಮಾನಸಿಕ ಶಕ್ತಿ ಮತ್ತು ಸಮಯ ಎರಡೂ ಇಲ್ಲದಿದ್ದರೂ, ಪ್ರಯತ್ನ ನಿಲ್ಲಿಸಿರಲಿಲ್ಲ. ಮತ್ತು, ಸಮುದಾಯದ ಔದಾರ್ಯದಿಂದ ತಮ್ಮಲ್ಲೊಬ್ಬರ ಮನೆಯ ಹಜಾರ ಇಲ್ಲವೇ ದೊಡ್ಡ ಕೊಠಡಿಯಲ್ಲಿ ಆರಾಮವಾಗಿ ಕುಳಿತು ಓದುವ ಮಕ್ಕಳ ಸಣ್ಣ ಗುಂಪುಗಳ ದೃಶ್ಯ ಮತ್ತು ಕಡು ಬಿಸಿಲು ಹಾಗು ಶೆಖೆಯಲ್ಲಿ ಕಿಕ್ಕಿರಿದ ಸಣ್ಣ ಕೊಠಡಿಗಳಲ್ಲಿ ಇಂಗ್ಲಿಷ್ ಪದ್ಯಗಳು-ಹಾಡುಗಳನ್ನು ಹಾಡುವ ಮಕ್ಕಳು, ಇದೆಲ್ಲಕ್ಕೂ ಮಿಗಿಲಾಗಿ, ಶಾಲೆ ಆರಂಭಕ್ಕೆ ಮೊದಲು ಗ್ರಾಮದ ರಸ್ತೆಗಳಲ್ಲಿ ಅಲೆಯುವ ತೆಳ್ಳಗಿನ ಶರೀರ-ಜೋಲು ಮುಖದ ಮಕ್ಕಳ ದೃಶ್ಯ ಕಣ್ಣಿನ ಮುಂದೆ ಕಟ್ಟುತ್ತದೆ. ತಮ್ಮ ಶಾಲೆಗಳಿಂದ ದೂರವಿರುವ, ನನ್ನ ಮನಸ್ಸಿನಲ್ಲಿರುವ ಮಕ್ಕಳ ಚಿತ್ರಗಳು ಇವು. ಈ ಎಲ್ಲ ನೆನಪುಗಳಲ್ಲಿ ಮೇಲುಗೈ ಪಡೆದಿದ್ದರೂ ಉಲ್ಲೇಖಗೊಳ್ಳದವರು ನಮ್ಮ ಶಿಕ್ಷಕರು-ನಮ್ಮ ಲಂಗರು ಮತ್ತು ಚಾಲನ ಶಕ್ತಿಯಾದ ಇವರು ಎಲ್ಲ ಪ್ರತಿಕೂಲ ಸನ್ನಿವೇಶ ನಡುವೆಯೂ ಶೈಕ್ಷಣಿಕ ತೊಡಗಿಸಿಕೊಳ್ಳುವಿಕೆಯನ್ನು ಸಾಧ್ಯಮಾಡಿದವರು ಮತ್ತು ಮುಂದುವರಿಯುವಂತೆ ನೋಡಿಕೊಂಡವರು.

ಈ ಪ್ರಯಾಣ ಮಕ್ಕಳಿಗೆ ಸುಲಭವಾದ್ದೇನೂ ಆಗಿರಲಿಲ್ಲ: ಅದು ಶಿಕ್ಷಕರಿಗೆ ಇನ್ನಷ್ಟು ಸವಾಲಾಗಿತ್ತು. ಸೋಂಕು ಅಂಟಬಹುದೆಂಬ ಭೀತಿಯ ವಿರುದ್ಧ ಹೋರಾಟ ಹಾಗು ಸೋಂಕಿಗೆ ಒಳಗಾಗುವಿಕೆಯೂ ಸೇರಿದಂತೆ ಅವರು ಎದುರಿಸಿದ ಸವಾಲುಗಳು ಭಾವನಾತ್ಮಕ ಮತ್ತು ದೈಹಿಕ ಮಾತ್ರ ಆಗಿರಲಿಲ್ಲ. ಮೊಹಲ್ಲಾ ತರಗತಿಗಳನ್ನು ನಡೆಸಲು ಸೂಕ್ತವಾದ ಜಾಗ ಹುಡುಕುವ ದೈಹಿಕ ಅನನುಕೂಲ ಅಥವಾ ಮಕ್ಕಳ ಮನೆಗಳಿಗೆ ನಿಯತವಾಗಿ ಭೇಟಿ ನೀಡಬೇಕಿತ್ತು. ಅವರ ಜವಾಬ್ದಾರಿಗಳಿಗೆ ಸೇರಿಸಿದ ಇನ್ನಷ್ಟು ಸವಾಲುಗಳೆಂದರೆ, ಅನನುಕೂಲಕರ ಪ್ರದೇಶಗಳು, ಸ್ಥಳ ಹಾಗು ಯೋಜನೆಗಳಲ್ಲಿ ಆಗಾಗ ಬದಲಾವಣೆ ಮತ್ತು ಹವಾಮಾನ ದೇವತೆಗಳ ಕೋಪವನ್ನೂ ಅವರು ಎದುರಿಸಬೇಕಿತ್ತು. ಆದರೆ, ಇದೆಲ್ಲಕ್ಕಿಂತ ಮುಖ್ಯವಾದದ್ದು ತೀವ್ರತರ ಅಸುರಕ್ಷಿತ ಪ್ರದೇಶದಲ್ಲಿ ಕಲಿಸುವಿಕೆಯನ್ನು ಸಾಧ್ಯವಾಗಿಸಲು ಹಾಗು ಮುಂದುವರಿಸುವ ಸೂಕ್ತ ಮಾದರಿ ಮತ್ತು ಕಾರ್ಯತಂತ್ರವನ್ನು ಕಂಡುಕೊಳ್ಳುವಲ್ಲಿನ ಹೋರಾಟ. ಇದು ಹಲವು ಸುತ್ತುಗಳ ಯೋಜನೆ, ಚರ್ಚೆ, ಯೋಜನೆಗಳ ಮರುಪರಿಷ್ಕರಣೆ ಮತ್ತು ಅನುಷ್ಠಾನವನ್ನು ಒಳಗೊಂಡಿತ್ತು- ದೃಶ್ಯ ಶ್ರಾವ್ಯ ಸಾಧನಗಳು, ಕಾರ್ಯಹಾಳೆಗಳ ಹಂಚಿಕೊಳ್ಳುವಿಕೆ, ವಿದ್ಯಾರ್ಥಿಗಳು ತಮ್ಮ ಕೆಲಸ ಮಾಡಲು ಫೋನ್ ಮೂಲಕ ನೆರವಾಗುವುದು, ಮುಖಾಮುಖಿಯಾಗಿ ಇಲ್ಲವೇ ಸಣ್ಣ ಬಹುವರ್ಗದ ಬಹುಹಂತ(ಎಂಜಿಎಂಎಲ್)ಗಳ ಗುಂಪುಗಳಲ್ಲಿ ತೊಡಗಿಸಿಕೊಳ್ಳುವಿಕೆ, ನಾನಾ ಸಂಪನ್ಮೂಲಗಳು, ಕಾರ್ಯಗಳು ಹಾಗು ವಿಧಾನ (ಸಂವಾದ, ಚರ್ಚೆ ಮತ್ತು ವಿವರಣೆ)ಗಳನ್ನು ಉರುಗೋಲಾಗಿ ಬಳಕೆ ಮತ್ತು ಆನಂತರ ತರಗತಿಗೆ ಅನುಸಾರವಾಗಿ ಗುಂಪುಗಳನ್ನಾಗಿ ವಿಂಗಡಿಸುವುದು ಇತ್ಯಾದಿ.

ಭವಿಷ್ಯದ ಯೋಜನೆಗಳು:

ಈ ಪ್ರಯಾಣವನ್ನು ಈಗ ಹಿಂತಿರುಗಿ ನೋಡಿದರೆ, ಮೊದಲಿಗೆ, ಇಂಥ ಕಷ್ಟಕರ ಕಾಲದಲ್ಲಿ ನಾವು ನಡೆಸಿದ ಪ್ರಯತ್ನಗಳು ನಮಗೆ ಸಾಕಷ್ಟು ಪಾಠ ಕಲಿಸಿದವು. ಉದಾಹರಣೆಗೆ, ಈ ಮೊದಲು ನಮ್ಮ ಶಾಲೆಗಳಲ್ಲಿ ಸಾಮಾನ್ಯವಾಗಿ ಕಾರ್ಯಹಾಳೆಗಳನ್ನು ಬಳಸುತ್ತಿರಲಿಲ್ಲ: ಆದರೆ, ಈಗ ಅವನ್ನು ಕಾರ್ಯಾಧರಿತ ಕಲಿಕೆಗಳನ್ನು ಸೃಷ್ಟಿಸಲು ನಿಯತವಾಗಿ ಬಳಸುತ್ತೇವೆ. ಎರಡನೆಯದಾಗಿ, ಆರಂಭದಲ್ಲಿ ನಮ್ಮ ಎಲ್ಲ ಶಾಲೆಗಳ ಎಲ್ಲ ತರಗತಿಗಳಲ್ಲಿ ಬಳಸುತ್ತಿದ್ದ ಆನ್‌ಲೈನ್ ಮಾದರಿಯನ್ನು ಈಗ ಯಾದಗಿರಿ ಮತ್ತು ಧಮ್‌ತಾರಿಯಲ್ಲಿ ಪೂರ್ವ ಪ್ರಾಥಮಿಕ ಹಂತದಲ್ಲಿ ಮಾತ್ರ ಸ್ವಲ್ಪ ಮಟ್ಟಿನ ಯಶಸ್ಸಿನಿಂದ ಬಳಸಲಾಗುತ್ತಿದೆ. ಅದೇ ರೀತಿ, ಎಂಜಿಎಂಎಲ್ ಗುಂಪುಗಳೊಂದಿಗೆ ಅರ್ಥಪೂರ್ಣವಾಗಿ ಪ್ರವರ್ತಿಸಿಕೊಳ್ಳುವ ಕಾರ್ಯತಂತ್ರಗಳ ಬಗ್ಗೆ ಮೊದಲು ನಾವು ಗಂಭೀರವಾಗಿ ಆಲೋಚಿಸಿರಲಿಲ್ಲ. ಆದರೆ, ಈಗ ನಮ್ಮ ಶಿಕ್ಷಕರು ಮಕ್ಕಳನ್ನು ಜೋಡಿಯಾಗಿ ಮತ್ತು ಗುಂಪುಗಳಲ್ಲಿ ಪರಿಣಾಮಕಾರಿಯಾಗಿ ಕೆಲಸ ಮಾಡುವಂತೆ ಮಾಡುವಲ್ಲಿ ಹೆಚ್ಚು ಸಮರ್ಥರಾಗಿದ್ದಾರೆ. ನಾನಾ ಪಠ್ಯಕ್ರಮ ಮತ್ತು ಸಹ-ಪಠ್ಯಕ್ರಮವನ್ನು ಸಾಧಿಸಲು ಮತ್ತು ಶಾಲೆಗಳಿಗೆ ದೀರ್ಘಕಾಲ ಗೈರಾಗುವ ಮಕ್ಕಳನ್ನು ಅರ್ಥಪೂರ್ಣವಾಗಿ ತೊಡಗಿಕೊಳ್ಳುವಂತೆ ಮಾಡಲು ಮಕ್ಕಳ ಸಾಹಿತ್ಯವನ್ನು ಬಳಸಿಕೊಳ್ಳುವುದರಿಂದ ಆಗುವ ವ್ಯಾಸಂಗಕ್ರಮದ ಅನುಕೂಲದ ಬಗ್ಗೆ ನಮಗೆ ಅರಿವಿದೆ: ಆದರೆ, ಅದನ್ನು ಲಾಕ್‌ಡೌನ್ ಅವಧಿಯಲ್ಲಿ ಬಳಸಿದಷ್ಟು ಸ್ವತಂತ್ರವಾಗಿ ಹಾಗೂ ಉಪಯುಕ್ತವಾಗಿ ಬಳಸುವ ಅವಕಾಶ ಈ ಹಿಂದೆ ಸಿಕ್ಕಿರಲಿಲ್ಲ. ಕೆಲವು ಶಾಲೆಗಳು ದಿನಚರಿ ಬರೆಯುವಿಕೆ ಮತ್ತು ಚಿತ್ರಕಲೆಯಂಥ ಆವಿಷ್ಕಾರಿಕ ಆಲೋಚನೆಗಳನ್ನು ಪರಿಚಯಿಸಿದವು. ಇದರೊಟ್ಟಿಗೆ ದಿನದ ಆರಂಭದಲ್ಲಿ ನಿಯಮಿತವಾಗಿ ವಿದ್ಯಾರ್ಥಿಗಳಿಗೆ ಅನುಕೂಲಕರವಾದ ಭಾಷೆ ಹಾಮತ್ತು ಇಂಗ್ಲಿಷ್‌ನಲ್ಲಿ ಹಾಡು ಹಾಗು ಪ್ರಾಸಪದ್ಯಗಳ ಸಾಮೂಹಿಕ ಗಾಯನವು ಎಳೆಯ ಮತ್ತು ಪ್ರಬುದ್ಧ ವಿದ್ಯಾರ್ಥಿಗಳಿಗೆ ಫಲದಾಯಕವಾಗಿ ಪರಿಣಮಿಸಿತು.

ಒಟ್ಟಿನಲ್ಲಿ ಹೇಳಬೇಕೆಂದರೆ, ನಮ್ಮ ಶಿಕ್ಷಕರಲ್ಲಿ ಈಗ ಭಾಷೆ ಮತ್ತು ಇನ್ನಿತರ ವಿಷಯಗಳನ್ನು ಕಲಿಸುವ ನಾನಾ ಮಾದರಿಗಳು ಮತ್ತು ವಿಧಾನಗಳನ್ನು ಅರ್ಥೈಸುವ ಬಗ್ಗೆ ಹೆಚ್ಚು ಅರಿವು ಇದೆ. ಶಾಲೆಗಳಿಲ್ಲದ ಕಾಲದಲ್ಲಿ ಅವರು ನಡೆಸಿದ ವಿವಿಧ ಪ್ರಯತ್ನಗಳ ಪ್ರಯೋಗದ ಫಲ ಇದು. ಬಹು ಮಾದರಿ ಬೋಧನೆಯು ನಮ್ಮ ಶಾಲೆಗಳಲ್ಲಿ ಉಳಿದುಕೊಳ್ಳುತ್ತದೆ ಮತ್ತು ವಿವಿಧ ರೀತಿಯ ಕಲಿಕೆ ಮೂಲಕ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುತ್ತದೆ ಎನ್ನುವುದು ಭರವಸೆಯ ಸಂಗತಿಯಾಗಿದೆ.

ಮುಂದಿನ ದಾರಿ:

ಈ ದುರ್ಭರ ಸಮಯದಲ್ಲಿ ಗಳಿಸಿದ ಒಳನೋಟಗಳು, ಕಲಿಕೆಯನ್ನು ಖಾತ್ರಿಗೊಳಿಸುವ ಶಿಕ್ಷಕರ ಸಾಧನಗಳ ಭಂಡಾರವಾಗಲಿದೆ ಎಂದು ನಿರೀಕ್ಷಿಸಬಹುದು. ಈಗ ನಮ್ಮ ಶಿಕ್ಷಕರು ವಿದ್ಯಾರ್ಥಿಗಳೊಡನೆ ತೊಡಗಿಸಿಕೊಳ್ಳಲು ಹೆಚ್ಚು ಪರಿಣಾಮಕಾರಿಯಾದ ಶೈಕ್ಷಣಿಕ ಕಾರ್ಯತಂತ್ರವನ್ನು ಹೊಂದಿರುವುದರಿಂದ ಮತ್ತು ಉತ್ತಮವಾಗಿ ಅರ್ಥ ಮಾಡಿಕೊಂಡಿರುವುದರಿಂದ, ಶಾಲೆಗಳು ಆರಂಭವಾಗಿ ಎಂದಿನಂತೆ ನಡೆಯಲಿ ಎಂದು ಅವರೆಲ್ಲರೂ ಕಾತರದಿಂದ ಕಾಯುತ್ತಿದ್ದಾರೆ. ಕೆಲವು ಶಾಲೆಗಳಲ್ಲಿ ಮಾಧ್ಯಮಿಕ ತರಗತಿಗಳು ಸರದಿಯಂತೆ ಅರ್ಧ ಸಾಮರ್ಥ್ಯದಲ್ಲಿ ನಡೆಯುತ್ತಿವೆ. ಶಿಕ್ಷಕರು ಇಂಥ ಸನ್ನಿವೇಶವನ್ನು ಚೆನ್ನಾಗಿ ಬಳಸಿಕೊಳ್ಳಲು ಮುಂದಾಗಿದ್ದು, ಇದು ಕೆಲವು ಪ್ರಸಂಗಗಳಲ್ಲಿ ಗುರಿ ಸಾಧಿಸುವ ನಿಟ್ಟಿನಲ್ಲಿ ಸ್ವಲ್ಪ ಮಟ್ಟಿನ ಆತುರಕ್ಕೂ ಕಾರಣವಾಗುತ್ತಿದೆ. ಅಲ್ಲದೆ, ವಿದ್ಯಾರ್ಥಿಗಳನ್ನು ನಿರಂತರವಾಗಿ ತೊಡಗಿಸಿಕೊಳ್ಳಲು ಆಗದ ಆತಂಕದಿಂದಾಗಿ ಶಿಕ್ಷಕರು ನಿಯಮಿತ ಒಳಸುರಿ ಹಾಗೂ ಶೀಘ್ರವಾಗಿ ಕಲಿಯಬೇಕೆಂಬ ನಿರೀಕ್ಷೆಯ ಗುಣಲಕ್ಷಣ ಇರುವ ರಾಚನಿಕ ಮಾರ್ಗಕ್ಕೆ ವಾಪಸಾಗುವ ಸ್ಥಿತಿಯನ್ನು ನಿರ್ಮಿಸಿದೆ.

ಇನ್ನುಳಿದ ಶಾಲೆಗಳಲ್ಲಿ ಪಾಠಯೋಜನೆ, ವೇಳಾಪಟ್ಟಿ ಮತ್ತು ಕಾರ್ಯತಂತ್ರಗಳ ಪರಿಷ್ಕರಣೆ ಆಗಿಂದಾಗ ನಡೆದಿದ್ದು, ಅವು ತಮ್ಮ ತಕ್ಷಣದ ವಾಸ್ತವವನ್ನು ಹೆಚ್ಚು ಗುರಿಯಾಗಿಸಿಕೊಂಡಿವೆ. ಪ್ರಾಯಶಃ ನಾನಾ ರಾಜ್ಯಗಳಲ್ಲಿ ಸಾಕಷ್ಟು ಅನಿಶ್ಚಿತತೆ ಇರುವುದರಿಂದ ಶಾಲೆಗಳನ್ನು ಮತ್ತೆ ತೆರೆಯಲು ದೊಡ್ಡ ಮಟ್ಟದ ಪ್ರಯತ್ನಗಳು ನಡೆಯುತ್ತಿಲ್ಲ:  . ಆದರೆ, ಹಿಂದಿರುಗಿ ನೋಡಿದರೆ, ಈ ದುರ್ಭರ ಸ್ಥಿತಿಯು ಕಣ್ಣಿಗೆ ಕಾಣದ ಸವಾಲುಗಳನ್ನು ಬಗೆಹರಿಸಲು ಕೆಲಸ ಮಾಡಲು ನೆರವಾಯಿತು. ಅವುಗಳನ್ನು ಪ್ರಯತ್ನಿಸುವ, ಚಿಂತನೆ ನಡೆಸುವ ಮತ್ತು ನಮ್ಮ ಬೋಧನೆ ಹಾಗು ಯೋಜನೆಗಳ ವ್ಯೂಹಸಂಬಂಧಿ ಪರಿಷ್ಕರಣೆಗೆ ನೆರವಾಯಿತು. ಈ ಆಚರಣೆಗಳನ್ನು ಬಲಪಡಿಸುವುದು ಮತ್ತು ಮುಂದುವರಿಕೆಯು ಶಾಲಾ ಜೀವನದ ಯಾಂತ್ರಿಕವಾಗಿ ನಿಗದಿಗೊಳಿಸಿದ ದಿನಚರಿ ಮತ್ತು ಪ್ರಕ್ರಿಯೆಗಳು, ಶೀಘ್ರ ಫಲಿತಾಂಶದ ನಿರೀಕ್ಷೆ ಹಾಗು ಹಗೇವಿನೊಳಗೆ ಕೆಲಸ ಮಾಡುವಂಥ ಪಾಶದಿಂದ ತಪ್ಪಿಸಿಕೊಳ್ಳುವಿಕೆಯನ್ನು ಆಧರಿಸಿದೆ. ಇಂಥ ಸನ್ನಿವೇಶದಲ್ಲಿ ಶಾಲಾ ಮುಖ್ಯಸ್ಥರ ಪಾತ್ರ ಇನ್ನಷ್ಟು ಗಮನಾರ್ಹವಾಗಲಿದೆ. ಈ ಕಠಿಣ ಪಾಠಗಳನ್ನು ಮರೆಯುವುದಿಲ್ಲ ಮತ್ತು ಆಲೋಚನಾಯುಕ್ತ ಶಾಲಾ ಪ್ರಕ್ರಿಯೆಗಳ ಭಾಗವಾಗಿ ಇವು ಭದ್ರವಾಗಿ ಸ್ಥಾಪಿತವಾಗುತ್ತವೆ ಎನ್ನುವ ಭರವಸೆಯನ್ನು ನಾವು ಇರಿಸಿಕೊಳ್ಳಬಹುದು.

* ಮಕ್ಕಳ ಗುರುತು ರಕ್ಷಿಸಲು ಅವರ ಹೆಸರುಗಳನ್ನು ಬದಲಿಸಲಾಗಿದೆ.

.........................................

ಪಲ್ಲವಿ ಚತುರ್ವೇದಿ ಅವರು ಇಂಗ್ಲಿಷ್ ಭಾಷಾ ಕಲಿಕೆ ಮತ್ತು ಶಿಕ್ಷಕರ ಇಂಗ್ಲಿಷ್ ವ್ಯಾಸಂಗಕ್ರಮ ಕ್ಷೇತ್ರದಲ್ಲಿ 2012ರಿಂದ ತೊಡಗಿಸಿಕೊಂಡಿದ್ದು, ಕಾರ್ಯಾಗಾರ ಮತ್ತು ಕೋರ್ಸ್‌ಗಳನ್ನು ವಿನ್ಯಾಸಗೊಳಿಸುತ್ತಾರೆ/ನಡೆಸಿಕೊಡುತ್ತಾರೆ. ಮಧ್ಯಪ್ರದೇಶದ

ಭೋಪಾಲ್‌ನಲ್ಲಿ ಸರ್ಕಾರಿ ಶಾಲೆಗಳು ಹಾಗು ಅಜೀಂ ಪ್ರೇಮ್‌ಜಿ ಶಾಲೆಗಳ ಶಿಕ್ಷಕರೊಂದಿಗೆ 9 ವರ್ಷ ಕೆಲಸ ಮಾಡಿದ್ದಾರೆ. ಭಾಷಾ ಶಿಕ್ಷಕರು ಮತ್ತು ಶಿಕ್ಷಕರ ಶಿಕ್ಷಕರಿಗೆ ಡಿಎಲ್‌ಎಡ್ ಕೋರ್ಸ್‌ನ ಅಧ್ಯಯನ ವಸ್ತುವನ್ನು ಸಿದ್ಧಗೊಳಿಸಲು ನೆರವಾಗಿದ್ದಾರೆ. ಇದಕ್ಕೆ ಮುನ್ನ ಕೇಂದ್ರೀಯ ವಿದ್ಯಾಲಯ ಸಂಘಟನೆಯಲ್ಲಿ ಸ್ನಾತಕೋತ್ತರ ವಿಭಾಗದ ಇಂಗ್ಲಿಷ್ ಶಿಕ್ಷಕಿಯಾಗಿದ್ದರು. ಪ್ರಸ್ತುತ ರಾಜಸ್ಥಾನಿನ ಸಿರೋಹಿಯಲ್ಲಿ ನೆಲೆಸಿದ್ದಾರೆ. ಅವರ ಇಮೇಲ್: pallavi.chaturvedi@azimpremjifoundation.org